# ಆಚರಣೆಯಲ್ಲಿ ಪ್ರಜಾಪ್ರಭುತ್ವ | ಓರ್ವ ಶಿಕ್ಷಕ ತೋರಿದ ಹಾದಿ

ಸಚಿನ್ ಸಾಲಕ್ಕಿ

ಇತ್ತೀಚೆಗೆ ನಾವು ಭಾರತಕ್ಕೆ ಸ್ವಾತಂತ್ರ್ಯ ಬಂದು ಎಪ್ಪತ್ತೈದು ವರ್ಷಗಳು ತುಂಬಿದಾಗ ಭವ್ಯವಾದ 'ಆಜಾದಿ ಕಾ ಅಮೃತ ಮಹೋತ್ಸವ' ಎಂಬುದಾಗಿ ಆಚರಿಸಿದೆವು. ಇದರ ಅರ್ಥವೇನೆಂದರೆ ನಾವು ಎಪ್ಪತ್ತೈದು ವರ್ಷಗಳ ಕಾಲ ಸ್ವತಂತ್ರ ರಾಷ್ಟ್ರವಾಗಿ ಉಳಿದಿದ್ದೇವೆ ಮತ್ತು ಒಂದು ಹೊಸ ಭಾರತವನ್ನು ಕಟ್ಟಲು ನಾವು ಒಂದು ದೇಶವಾಗಿ ಅನುಸರಿಸಬೇಕಾದ ಉದಾತ್ತ ಮೌಲ್ಯಗಳನ್ನು ಕಟ್ಟಿಕೊಂಡ ನಮ್ಮದೇ ಆದ ಸಂವಿಧಾನ-ವೊಂದನ್ನು ಹೊಂದಿದ್ದೇವೆ ಎಂಬುದಾಗಿದೆ. ಅದೇನೇ ಇರಲಿ, ಈ ಸಾಂವಿಧಾನಿಕ ಮೌಲ್ಯಗಳ ಕುರಿತು ಜಾಗೃತಿಯನ್ನು ಉಂಟುಮಾಡಲು ನಾವು ಬಹಳ ಕಡಿಮೆ ಕ್ರಮಗಳನ್ನು ತೆಗೆದುಕೊಂಡಿದ್ದೇವೆ ಎಂಬುದು ಸ್ಪಷ್ಟ- ನಾವು ಓದಲು ಸಂವಿಧಾನ ಸಿಗುವಂತೆ ಮಾಡಿಲ್ಲ ಅಥವಾ ಮಕ್ಕಳು ಈ ಸಾಂವಿಧಾನಿಕ ಮೌಲ್ಯಗಳ ನಿಜವಾದ ಅರ್ಥವನ್ನು ಮನವರಿಕೆ ಮಾಡಿಕೊಳ್ಳುವಂತೆ/ ಅಂತರ್ಗತಗೊಳಸಿಕೊಳ್ಳುವಂತೆ ಮಾಡಿಲ್ಲ. ಮಕ್ಕಳು 5-7 ವರ್ಷಗಳ ಅವಧಿಯಲ್ಲಿ ನಿಜಕ್ಕೂ ಮೌಲ್ಯಗಳನ್ನು ಗಳಸಿಕೊಳ್ಳುತ್ತಾರೆ ಎಂದು ಅಧ್ಯಯನಗಳು ತೋರಿಸಿಕೊಟ್ಟಿವೆ ಮತ್ತು ಈ ಮೌಲ್ಯಗಳನ್ನು ಗಳಸಿಕೊಳ್ಳುವಲ್ಲಿ ಒಂದು ದೇಶವಾಗಿ, ಸಮಾಜವಾಗಿ ಮತ್ತು ವ್ಯಕ್ತಿಗಳಾಗಿ ನಮ್ಮ ಪ್ರಯತ್ನಗಳು ಅಸಮರ್ಪಕವಾಗಿವೆ. ಆದರೆ ಇಚ್ಛಾಶಕ್ತಿಯನ್ನು ಹೊಂದಿದ್ದಲ್ಲಿ ಒಬ್ಬ ವ್ಯಕ್ತಿ ಸಹ ಏನನ್ನೂ ಸಾಧಿಸಬಹುದು ಎಂಬುದನ್ನು ಈ ಲೇಖನ ಎತ್ತಿ ತೋರಿಸುತ್ತದೆ.

## ಧ್ಯೇಯಕಾರ್ಯದಲ್ಲಿ ತೊಡಗಿಕೊಂಡ ಶಿಕ್ಷಕ

ಶೇಖರ್ ನಾಯಕ್ ಅವರು, ಗೋದಿನಾಳ್ (ಕೊಪ್ಪಳ ಜಿಲ್ಲೆ, ಕರ್ನಾಟಕ) ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆಯಲ್ಲಿ ಸಹಾಯಕ ಶಿಕ್ಷಕರಾಗಿದ್ದು, ಬದುಕಿನಲ್ಲಿ ಸಾಂವಿಧಾನಿಕ ಮೌಲ್ಯಗಳನ್ನು ಆಚರಿಸಲು ಪ್ರಯತ್ನಿಸುತ್ತಿದ್ದಾರೆ. ಶಾಲೆಗೆ ಹೋಗುವ ಬಗ್ಗೆ ಅಥವಾ ಶಿಕ್ಷಣದ ಬಗ್ಗೆ ತೀರಾ ಕಡಿಮೆ ತಿಳವಳಿಕೆ ಇರುವ ದೂರ ಪ್ರದೇಶದ ಸಮುದಾಯದಲ್ಲಿ ಇರುವ ಶಾಲೆ ಅದು. ಪುಟ್ಟದಾದ ಶಾಲಾ ಆವರಣದಲ್ಲಿ ಕೇವಲ ಮೂರು ಗಟ್ಟಿಯಾದ ಕೊಠಡಿಗಳವೆ ಮತ್ತು ಬಾಗಿಲಿನಲ್ಲೇ ಶಾಲೆಗೆ ಭೇಟಿ ನೀಡುವವರನ್ನು ಸ್ವಾಗತಿಸುವ ಕಲ್ಲಿನಲ್ಲಿ ಕೊರೆಯಲ್ಪಟ್ಟ ಭಾರತದ ಸಂವಿಧಾನದ ಪೀಠಿಕೆಯೂ ಇದೆ. ಪ್ರತಿದಿನದ ಶಾಲೆಯ ಪ್ರಾರಂಭದ ಸಾಮಾನ್ಯ ಸಭೆಯ ಭಾಗವಾಗಿ ವಿದ್ಯಾರ್ಥಿಗಳಲ್ಲಿ ಒಬ್ಬರು ಆ ಪೀಠಿಕೆಯನ್ನು ಓದತೊಡಗುತ್ತಾರೆ ಮತ್ತು ಉಳಿದವರು ಆಕೆ ಅಥವಾ ಆತ ಓದಿದ್ದನ್ನು ಪುನರುಚ್ಚರಿಸುತ್ತಾರೆ; ಐದನೆಯ ತರಗತಿಯನ್ನು ಮುಟ್ಟುವ ವೇಳೆಗೆ ಪ್ರತಿಯೊಬ್ಬರೂ ಅದನ್ನು ನೆನಪಿನಿಂದಲೇ ಸುಲಭವಾಗಿ ಪುನರುಚ್ಚರಿಸುವಷ್ಟು ಸಮರ್ಥರಾಗಿರುತ್ತಾರೆ.

ಶೇಖರ್ ನಾಯಕ್ ಅವರು ಮಕ್ಕಳಲ್ಲಿ ಸಾಂವಿಧಾನಿಕ ಮೌಲ್ಯಗಳನ್ನು ಸ್ಥಾಪಿಸಲು ಪ್ರತಿಯೊಂದು ಅವಕಾಶವನ್ನೂ ಉಪಯೋಗಿಸಿಕೊಳ್ಳುತ್ತಾರೆ. ಆ ಮೌಲ್ಯಗಳೆಂದರೆ:

- ಸಮಾನತೆ: ಮಕ್ಕಳನ್ನು ಅವರ ಸೂಕ್ತ ಹೆಸರಿನ ಮೂಲಕ ಕರೆಯುತ್ತಾ ಅವರನ್ನು ಗೌರವಿಸುವುದು; ಅವರ ಶಾರೀರಿಕ ರೂಪವನ್ನು, ಸಾಮಾಜಿಕ- ಆರ್ಥಿಕ ಹಿನ್ನೆಲೆಯನ್ನು ಗೌರವಿಸುವುದು ಮತ್ತು ಎಲ್ಲ ಅಂಗಗಳಿಗೆ ಸೇರಿರುವವರನ್ನು ಸಮಾನವಾಗಿ ನಡೆಸಿಕೊಳ್ಳುವುದು.
- ಸ್ವಾತಂತ್ರ್ಯ: ಎಲ್ಲಾ ಮಕ್ಕಳಿಗೂ ಮಾತನಾಡಲು ಅವಕಾಶ ನೀಡುವುದು, ಅವರಿಗೆ ಬೇಕೆನಿಸಿದ ಸ್ಥಳಗಳಲ್ಲಿ ಕುಳಿತುಕೊಳ್ಳಲು ಅನುವು ಮಾಡಿಕೊಡುವುದು.
- ಭ್ರಾತೃತ್ವ: ಒಬ್ಬರು ಇನ್ನೊಬ್ಬರ ಬಗ್ಗೆ ಪರಾನುಭೂತಿಯನ್ನು ಬೆಳೆಸಿಕೊಳ್ಳಲು ಹಾಗೂ ಒಂದು ತಂಡವಾಗಿ ಕೆಲಸ ಮಾಡಲು ಉತ್ತೇಜಿಸುವುದು ಮತ್ತು ಒಬ್ಬರು ಇನ್ನೊಬ್ಬರ ಕೆಲಸದ ಬಗ್ಗೆ ಮೆಚ್ಚುಗೆಯನ್ನು ಬೆಳೆಸಿಕೊಳ್ಳುವಂತೆ ನೋಡಿಕೊಳ್ಳುವುದು.

ಇದನ್ನು ಅವರು ಮುಂಜಾವಿನ ಸಾಮಾನ್ಯ ಸಭೆಯಿಂದ ಹಿಡಿದು ತರಗತಿಯವರೆಗೆ ಎಲ್ಲ ಕಡೆಯೂ ಅನುಸರಿಸಿ ಸಾಧಿಸುತ್ತಾರೆ, ಇದಕ್ಕೆ ಅವರು, 'ಪ್ರಜಾತಾಂತ್ರಿಕ ಪ್ರಕ್ರಿಯೆ' ('the democratic process') ಎಂದು ಹೆಸರಿಸಿದ್ದಾರೆ. ಎಲ್ಲರೂ ವೃತ್ತಾಕಾರವಾಗಿ ಕುಳಿತುಕೊಳ್ಳುವುದರಿಂದ ಹಿಡಿದು, ಚರ್ಚೆಯಲ್ಲಿ ಪ್ರತಿಯೊಂದು ಮಗುವಿಗೂ ಪ್ರಾಧಾನ್ಯತೆ ನೀಡಿ ಭಾಗವಹಿಸುವಂತೆ ಮಾಡುವುದು, ಪ್ರತಿಯೊಬ್ಬರ ಅಭಿಪ್ರಾಯವನ್ನು ಮೆಚ್ಚಿಕೊಳ್ಳುವುದು, ಯಾವುದು ಸರಿ ಅಥವಾ ತಪ್ಪು ಎಂಬುದನ್ನು ಅವರೇ ಅರ್ಥ ಮಾಡಿಕೊಳ್ಳುವಂತೆ, ಅನ್ವೇಷಿಸುವಂತೆ ಅವರನ್ನು ಪ್ರಶ್ನೆ ಮಾಡುವುದು ಇವೆಲ್ಲಾ ಆ ಪ್ರಕ್ರಿಯೆಯಲ್ಲಿ ಸೇರುತ್ತವೆ. ವಿಶ್ವಾಸವನ್ನು ಗಳಸಿಕೊಳ್ಳಲು ಮತ್ತು ಮಕ್ಕಳೊಂದಿಗೂ ಹಾಗೂ ಸಮುದಾಯದೊಂದಿಗೂ ಆತ್ಮೀಯ ಸಂಬಂಧವನ್ನು ಬೆಸೆದುಕೊಳ್ಳಲು ಅವರಿಗೆ ಇದರಿಂದ ನೆರವಾಗಿದೆ. ಹೆಣ್ಣು ಮಕ್ಕಳಿಗೆ ಶಿಕ್ಷಣ ನೀಡುವುದರ ಬಗ್ಗೆ ಅವರಿಗಿರುವ ಸೂಕ್ಷ್ಮತೆ ಶ್ಲಾಘನೀಯ ಮತ್ತು ಅದು ಪ್ರತಿವರ್ಷವೂ ವಿದ್ಯಾರ್ಥಿಗಳ ನೋಂದಣಿ ಹೆಚ್ಚಲು ಕೊಡುಗೆ ನೀಡಿದೆ. ಪ್ರಸ್ತುತ ಆ ಸಂಖ್ಯೆ 142 ಆಗಿದ್ದು, ಇದರಿಂದಾಗಿ ಶಾಲೆಯಲ್ಲಿ ಹುಡುಗರಿಗಿಂತ ಹುಡುಗಿಯರ ಸಂಖ್ಯೆ ಹೆಚ್ಚಿದೆ.

ಶಿಕ್ಷಣ ಮತ್ತು ಮಕ್ಕಳ ಕುರಿತು ಶೇಖರ್ ನಾಯಕ್ ಅವರಿಗಿರುವ ಧೋರಣೆಯು, ತರಗತಿ ಆಚರಣೆಯನ್ನು ರೂಪಿಸಲು ಅವರಿಗೆ

ನೆರವಾಗಿದ್ದು, ಅದರಲ್ಲಿ ಶಿಕ್ಷಕರು ವೈಯಕ್ತಿಕವಾಗಿ ಮತ್ತು ಮಕ್ಕಳೊಂದಿಗೆ ಜೊತೆಗೂಡಿ ಕೆಲವೊಂದು ರೂಢಿಗಳನ್ನು ಸ್ಥಾಪಿಸಿಕೊಂಡಿದ್ದಾರೆ. ಚರ್ಚೆಯ ಸಂದರ್ಭದಲ್ಲಿ ಶಿಕ್ಷಕರು ಮತ್ತು ಪ್ರತಿಯೊಬ್ಬ ವಿದ್ಯಾರ್ಥಿಯೂ ಉಳಿದವರಿಗೆ ಕಾಣಿಸುವಂತೆ ವೃತ್ತಾಕಾರವಾಗಿ ಕುಳಿತುಕೊಳ್ಳುವುದು ಮತ್ತು ಮಧ್ಯಾಹ್ನದ ಬಿಸಿಯೂಟದ ವೇಳೆಯಲ್ಲಿ ಶಿಕ್ಷಕರು ಮಕ್ಕಳೊಂದಿಗೆ ಸೇರಿಕೊಳ್ಳುವುದು ಇವು ಅದರಲ್ಲಿ ಸೇರಿವೆ. ಬೇರೆಯವರ ಮಾತುಗಳನ್ನು ಆಲಿಸುವುದು, ಪ್ರತಿಯೊಬ್ಬರ ಅಭಿಪ್ರಾಯವನ್ನೂ ಮೆಚ್ಚಿಕೊಳ್ಳುವುದು, ಚರ್ಚೆಯ ಸಂದರ್ಭದಲ್ಲಿ ಪ್ರಶ್ನೆಗಳನ್ನು ಕೇಳಲು ಅಥವಾ ಅಭಿಪ್ರಾಯವನ್ನು ಹಂಚಿಕೊಳ್ಳಲು ತಮ್ಮ ಕೈಯೆತ್ತಿ ಸರತಿ ಬರುವವರೆಗೂ ಕಾಯುವುದು ಇವು ವಿದ್ಯಾರ್ಥಿಗಳು ಅನುಸರಿಸುವ ರಿವಾಜುಗಳು ಮತ್ತು ಇವು ಶೇಖರ್ ನಾಯಕ್ ಅವರ ವಿದ್ಯಾರ್ಥಿಗಳು ಒಬ್ಬರು ಇನ್ನೊಬ್ಬರ ಬಗ್ಗೆ ಗೌರವವನ್ನು ಬೆಳೆಸಿಕೊಳ್ಳಲು ನೆರವಾಗಿವೆ.ಆರಂಭದಲ್ಲಿ, ಚರ್ಚೆಯ ವೇಳೆಯಲ್ಲಿ ಮಕ್ಕಳು ತಮ್ಮನ್ನು ತಾವು ಅಭಿವ್ಯಕ್ತಿಸಿಕೊಳ್ಳುವಂತೆ ಮಾಡುವುದು ಅವರಿಗೆ ಸವಾಲಾಗಿತ್ತು. ಆದರೆ ತಾನೂ ಅವರಲ್ಲಿ ಒಬ್ಬನಾಗುವ ಮೂಲಕ, ಅವರ ಪರಿಸ್ಥಿತಿಯನ್ನು ಸಾಂದರ್ಭೀಕರಿಸುವ ಮೂಲಕ ಮತ್ತು ಎಲ್ಲ ಚರ್ಚೆಗಳನ್ನು ಮಕ್ಕಳ ಬದುಕಿನೊಂದಿಗೆ ಬೆಸೆಯುವ ಮೂಲಕ ಅವರಿಗೆ ಇದನ್ನು ಸಾಧಿಸುವುದು ಸಾಧ್ಯವಾಗಿದೆ. ಜನತಾಂತ್ರಿಕವಾಗಿ ನಡೆದುಕೊಳ್ಳುವುದು ಸುಲಭವಲ್ಲ. ಏಕೆಂದರೆ, ಬದುಕನ್ನು ನೋಡುವಲ್ಲಿ ಇದು ತೀರಾ ಹೊಚ್ಚ ಹೊಸದಾದ ಮಾರ್ಗ, ಇದಕ್ಕೆ ಹೊಂದಿಕೊಳ್ಳಲು ಸಮಯ ಬೇಕಾಗುತ್ತದೆ ಎಂದು ಅವರು ಹೇಳುತ್ತಾರೆ.

## ಪ್ರಕ್ರಿಯೆ

ರಾಷ್ಟ್ರೀಯ ಹಬ್ಬಗಳನ್ನು ಆಚರಿಸುವುದು, ಹಬ್ಬಗಳನ್ನು ಹೇಗೆ ಆಚರಿಸಬೇಕು ಎಂಬ ಬಗ್ಗೆ ಮಕ್ಕಳ ಅಭಿಪ್ರಾಯಗಳನ್ನು ಕೇಳುವುದು ಮತ್ತು ಪೋಷಕರನ್ನು ಹಾಗೂ ಸಮುದಾಯವನ್ನು ಅಂತಹ ಸಮಾರಂಭಗಳಿಗೆ ಆಹ್ವಾನಿಸುವುದು ಮುಂತಾದ ಶೈಕ್ಷಣಿಕ ಚಟುವಟಿಕೆಯಲ್ಲದ ಜವಾಬ್ದಾರಿಗಳನ್ನು ಮಕ್ಕಳಿಗೆ ಕೊಡುವ ಮೂಲಕ ಶೇಖರ್ ನಾಯಕ್ ಅವರು ಈ ಜನತಾಂತ್ರಿಕ ಪ್ರಕ್ರಿಯೆಯನ್ನು ಆರಂಭಿಸಿದರು. ಅವರು ಇದನ್ನು ವಿದ್ಯಾರ್ಥಿಗಳ ಒಂದು ಸಣ್ಣ ಗುಂಪಿನ ಜೊತೆಯಲ್ಲಿ ಆರಂಭಿಸಿದಾಗ, ಅವರ ವರ್ತನೆಯಲ್ಲಿ ಮತ್ತು ಕ್ರಮೇಣ ಶೈಕ್ಷಣಿಕ ಸಾಧನೆಯಲ್ಲಿ ಧನಾತ್ಮಕ ಬದಲಾವಣೆಗಳು ಕಂಡು ಬಂದವು. ಮೂರನೇ ತರಗತಿ ಮತ್ತು ಅದರ ಮೇಲಿನ ಹಂತದ ಮಕ್ಕಳಲ್ಲಿ ಶೇಕಡಾ 95ರಷ್ಟು ಮಕ್ಕಳು ಓದುವುದು ಮತ್ತು ಓದಿದ್ದನ್ನು ಗ್ರಹಿಸುವುದು, ಸ್ವತಂತ್ರವಾಗಿ ಬರೆಯುವ ಕೌಶಲ್ಯವನ್ನು ಹೊಂದಿರುವುದು ಹಾಗೂ ಅದೇ ರೀತಿ ಗಣಿತದ ನಾಲ್ಕು ಮೂಲಭೂತ ಕಾರ್ಯಾಚರಣೆಯನ್ನು ಕಲಿಯುವುದು ಇವುಗಳನ್ನು ಸಾಧಿಸುವ ಮೂಲಕ ಕಲಿಸುವ – ಕಲಿಯುವ ಪ್ರಕ್ರಿಯೆಯು ಬಹಳ ಯಶಸ್ವಿಯಾಗಿದೆ.ಕೋವಿಡ್–19 ಲಾಕ್ಡೌನ್ ಅವಧಿಯಲ್ಲಿ ಅವರು ಪ್ರತಿಯೊಬ್ಬ ವಿದ್ಯಾರ್ಥಿಯ ಮನೆಗೂ ಭೇಟಿ ನೀಡಿದರು ಮತ್ತು ಅವರ ಮನೆಗಳ ಹತ್ತಿರದಲ್ಲಿನ ಸಾರ್ವಜನಿಕ ಸ್ಥಳಗಳಲ್ಲಿ ಮಕ್ಕಳಿಗಾಗಿ ಎರಡು ಕಲಿಯುವ ಕೇಂದ್ರಗಳನ್ನು ಸೃಷ್ಟಿಸಿದರು. ಮಕ್ಕಳ ಕಲಿಕೆಯನ್ನು ಖಚಿತಪಡಿಸಲು ಅವರು ಪ್ರತಿಗುಂಪಿನ ಜೊತೆಗೆ ಅರ್ಧ ದಿನ ಕಳೆಯುತ್ತಿದ್ದರು. ಸಾಂಕ್ರಾಮಿಕದಿಂದಾಗಿ ಮಕ್ಕಳನ್ನು ಕಲಿಕಾ ಕೇಂದ್ರಗಳಿಗೆ ಕಳುಹಿಸಲು ಹಿಂಜರಿಯುತ್ತಿದ್ದ ಪೋಷಕರ ಮಕ್ಕಳನ್ನು ಮನೆಯಲ್ಲೇ ಭೇಟಿಯಾಗುತ್ತಾ ವ್ಯಕ್ತಿಗತವಾಗಿಯೂ ಮಕ್ಕಳಿಗೆ ಬೆಂಬಲ ನೀಡಿದರು.

ಇದರ ಜೊತೆಗೆ, ಅಂಧಶ್ರದ್ಧೆಯ ಕುರಿತು ಉದ್ಭವಿಸುತ್ತಿದ್ದ ಮಕ್ಕಳ ಪ್ರಶ್ನೆಗಳು, ಅವುಗಳನ್ನು ಉತ್ತರಿಸಲಿಕ್ಕಾಗಿ ಸಾಮುದಾಯಿಕ ಸಮಾರಂಭಗಳನ್ನು ಸಂಘಟಿಸಲು ಅವರನ್ನು ಪ್ರೇರೇಪಿಸಿದವು.

## ನಾಲ್ಕು ಅಂಶಗಳ ಕಾರ್ಯಕ್ರಮ

ಶೇಖರ್ ನಾಯಕ್ ಅವರ ಪ್ರಜಾತಾಂತ್ರಿಕ ಪ್ರಕ್ರಿಯೆಯು ಈ ಕೆಳಗಿನ ಅಂಶಗಳಿಗೆ ಒತ್ತು ನೀಡುತ್ತದೆ;

1. ಭಾರತದ ಸಂವಿಧಾನದ ಪೀಠಿಕೆಯು ಎಲ್ಲರಿಗೂ ಸಿಗುವಂತೆ ನೋಡಿಕೊಳ್ಳಬೇಕು. ಪ್ರಸ್ತುತ, ಗ್ರಾಮೀಣ ಪ್ರದೇಶದ ಕಚೇರಿ, ಶಾಲೆ ಇಂತಹ ಸಾರ್ಜನಿಕ ಸ್ಥಳಗಳಲ್ಲಿ ಅದನ್ನು ಕಾಣುವುದು ತುಂಬಾ ಕಷ್ಟ. ಶಾಲೆಗಳ ಗೋಡೆಗಳ ಮೇಲೆ ಸಂವಿಧಾನದ ಪೀಠಿಕೆಯನ್ನು ಪ್ರದರ್ಶಿಸುವುದರಿಂದ ಅದು ಹೆಚ್ಚಾಗಿ ಎಲ್ಲರಿಗೂ ಗೋಚರಿಸುತ್ತದೆ ಮತ್ತು ಮಕ್ಕಳು ಒಂದು ವೇಳೆ ಅದನ್ನು ಅರ್ಥ ಮಾಡಿಕೊಳ್ಳದಿದ್ದರೂ ಕಡೆಯ ಪಕ್ಷ ಅದನ್ನು ಯಾವಾಗಲೂ ನೋಡುತ್ತಿರುತ್ತಾರೆ ಮತ್ತು ಅದರ ಬಗ್ಗೆ ಬೇರೆಯವರಿಗೆ ಹೇಳುತ್ತಾರೆ. ನಾವು ಕಟ್ಟಬೇಕು ಎಂದುಕೊಂಡಿರುವ ಸಮಾಜದ ಕುರಿತಾದ ಕಲ್ಪನೆಯನ್ನು ಸೃಷ್ಟಿಸುವಲ್ಲಿ ಇದು ಮೊದಲ ಹೆಜ್ಜೆ ಎಂದು ಪರಿಗಣಿಸಬಹುದು.

2. ಬಹುತೇಕ ಜನ ವಯಸ್ಕರು ಸಹ ಪೀಠಿಕೆಯ ಮೊದಲ ಎರಡು ಮೂರು ಸಾಲುಗಳನ್ನು ನೆನಪಿಸಿಕೊಳ್ಳಲು ಕಷ್ಟಪಡುತ್ತಾರೆ. ರಾಷ್ಟ್ರಗೀತೆಯನ್ನು ಹಾಡುವುದರೊಂದಿಗೆ ಶಾಲೆಯ ಮುಂಜಾವಿನ ಸಾಮಾನ್ಯ ಸಭೆಯಲ್ಲಿ ಇದನ್ನೂ ಓದುವುದನ್ನು ಕಡ್ಡಾಯಗೊಳಿಸಬೇಕು.

3. ನಿಜವಾದ ಮೌಲ್ಯಗಳನ್ನು ಗಳಿಸಿಕೊಳ್ಳುವುದು ನಾವು ಏನನ್ನು ಆಚರಿಸುತ್ತೇವೆ ಹಾಗೂ ಪ್ರದರ್ಶಿಸುತ್ತೇವೆ ಎಂಬುದರಿಂದಲೇ ಹೊರತು ನಾವು ಏನು ಮಾತನಾಡುತ್ತೇವೆ ಎಂಬುದರಿಂದಲ್ಲ. ಮಕ್ಕಳು ತರಗತಿಯಲ್ಲಾಗಲೀ, ಹೊರಗಡೆಯಾಗಲೀ ತಪ್ಪು ಮಾಡಿದಾಗ, ಅವರನ್ನು ನೋಡಿಕೊಳ್ಳುವ ದೊಡ್ಡವರು ಸಂವಿಧಾನ ಪೀಠಿಕೆಯಲ್ಲಿನ ತತ್ವಗಳನ್ನು ಅನುಸರಿಸಿ ತಮ್ಮನ್ನು ನಡೆಸಿಕೊಳ್ಳುತ್ತಿದ್ದಾರೆ ಎಂದು ಮಕ್ಕಳಿಗೆ ಅನ್ನಿಸಬೇಕು, ತನ್ಮೂಲಕ ಒತ್ತಿಒತ್ತಿ ಹೇಳದೆಯೂ ಮಕ್ಕಳು ಅವರ ನಿದರ್ಶನವನ್ನೇ ಪಾಲಿಸುವಂತಾಗುತ್ತದೆ.

4. ಜನತಂತ್ರದ ಬಗ್ಗೆ ಅಭ್ಯಾಸದ ಮೂಲಕ ಕಲಿಯುವುದರಿಂದಾಗಿ ಮಕ್ಕಳು ತಮ್ಮ ವಯಸ್ಸು ಏನೇ ಇರಲಿ ತಾವು ಯಾವ ಗೌರವಕ್ಕೆ ಅರ್ಹರೋ ಅದನ್ನು ಪಡೆದುಕೊಳ್ಳುವಂತಾಗುತ್ತದೆ. ತಮ್ಮ ಅಭಿಪ್ರಾಯವನ್ನು ಧ್ವನಿಸುವಂತಾಗುತ್ತದೆ, ಬೇರೆಯವರ ಅಭಿಪ್ರಾಯವನ್ನು ಸ್ವೀಕರಿಸಲು ತಮ್ಮನ್ನೇ ತೆರೆದುಕೊಳ್ಳಲು ಸಾಧ್ಯವಾಗುತ್ತದೆ, ಸಂವಹನದ ಕೌಶಲ್ಯಗಳನ್ನು ಅಭಿವೃದ್ಧಿಪಡಿಸಿಕೊಳ್ಳಲು ಸಾಧ್ಯವಾಗುತ್ತದೆ ಮತ್ತು ವೈಜ್ಞಾನಿಕ ಆಲೋಚನಾ ವಿಧಾನಕ್ಕೆ ಅಗತ್ಯವಾದ ವಿಮರ್ಶಾತ್ಮಕ ಚಿಂತನೆಯನ್ನು ಬೆಳೆಸಿಕೊಳ್ಳಲು ಸಾಧ್ಯವಾಗುತ್ತದೆ. ತಂಡದಲ್ಲಿ ಕೆಲಸ ಮಾಡುವುದು, ಸಹಯೋಗದಲ್ಲಿ ಜವಾಬ್ದಾರಿಯನ್ನು ನಿರ್ವಹಿಸುವುದು ಇವುಗಳನ್ನು ಉತ್ತೇಜಿಸಬೇಕು.

“ಅವರ ವಯಸ್ಸು ಏನೇ ಇರಲಿ, ಬೇರೆಯವರ ಕುರಿತಾದ ಸೂಕ್ಷ್ಮತೆ ಮತ್ತು ಗೌರವ ಇವುಗಳು, ಜನತಾಂತ್ರಿಕ ಶಾಲಾ ಪ್ರಕ್ರಿಯೆಯ ಪರಿಕಲ್ಪನೆಯನ್ನು ರೂಪಿಸಲು ನನಗೆ ನೆರವಾಗಿವೆ. ಪ್ರತಿಯೊಂದು ಮಗು ಮಾತನಾಡಲು ಹಾಗೂ ಪ್ರಶ್ನಿಸಲು ಅವಕಾಶಗಳನ್ನು ಸೃಷ್ಟಿಸುವುದು ಮತ್ತು ಸಾಮಾಜಿಕ– ಆರ್ಥಿಕ– ಧಾರ್ಮಿಕ ವೈವಿಧ್ಯಗಳನ್ನು ಗೌರವಿಸುವುದು ಇವು, ಈ ಫಲಿತಾಂಶವನ್ನು ಸಾಧಿಸಲು ನನಗೆ ನೆರವಾಗಿವೆ” ಎಂದು ಶೇಖರ್ ನಾಯಕ್ ಹೇಳುತ್ತಾರೆ.



ಚಿತ್ರ 1: ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆ, ಗೋದಿನಾಳ.



ಸಚಿನ್ ಸಾಲಕ್ಕಿ ಅವರು ಕರ್ನಾಟಕದ ಕೊಪ್ಪಳದಲ್ಲಿನ, ಅಜೀಂ ಪ್ರೇಮ್ ಜಿ ಫೌಂಡೇಷನ್ ಜಿಲ್ಲಾ ಸಂಸ್ಥೆಯಲ್ಲಿ ಸಂಪನ್ಮೂಲ ವ್ಯಕ್ತಿಯಾಗಿದ್ದಾರೆ. ಅವರು ರಾಸಾಯನಿಕ ಇಂಜಿನಿಯರಿಂಗ್ ಅನ್ನು ಅಧ್ಯಯನ ಮಾಡಿದ್ದು, ಅಜೀಂ ಪ್ರೇಮ್ ಜಿ ಫೌಂಡೇಷನ್ 2015ರ ತಂಡದ ಫೆಲೋ ಆಗಿದ್ದರು. ಅವರು ಇದೀಗ ಆರಂಭಿಕ ಗಣಿತದ ಶಿಕ್ಷಕ ಶಿಕ್ಷಕರಾಗಿ, ಬೋಧಕರಾಗಿ ಕೆಲಸ ಮಾಡುತ್ತಿದ್ದಾರೆ. ಅವರನ್ನು sachinkumar.salakki@azimpremjifoundation.org ಮೂಲಕ ಸಂಪರ್ಕಿಸಬಹುದು.

ಅನುವಾದ: **ಬಿ.ಆರ್.ಮಂಜುನಾಥ್** | ಪರಿಶೀಲನೆ: **ಟಿ.ಎನ್.ವಾಸುದೇವಮೂರ್ತಿ**

ನಮಗೆಲ್ಲರಿಗೂ ವಿಭಿನ್ನ ಅಸ್ಮಿತೆಗಳಿವೆ, ಅದರಲ್ಲಿ ಕೆಲವು ಸಾಮಾಜಿಕ ಮತ್ತು ಆರ್ಥಿಕ ರಚನೆಗಳಿಂದ ನಮಗೆ ಬಂದಂಥವು; ಉದಾ: ಜಾತಿ, ಲಿಂಗ, ವರ್ಗ, ಧರ್ಮ ಇತ್ಯಾದಿ. ಈ ಎಲ್ಲವೂ ನಮ್ಮ ದೈನಂದಿನ ಆಯ್ಕೆಗಳು ಮತ್ತು ಅದೇ ರೀತಿಯಲ್ಲಿ ಅನುಭವಗಳನ್ನು ನಿರ್ಧರಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ಇದು ತರಗತಿಯ ಸ್ಥಳಕ್ಕೂ ಅನ್ವಯಿಸುವಂಥದ್ದು. ಇಲ್ಲಿಯೇ ಶಿಕ್ಷಕರಾಗಿ ಅಥವಾ ನೆರವುಗಾರರಾಗಿ ನಮ್ಮ ಪಾತ್ರ ಬರುವುದು – ಅದು ನಮ್ಮ ಬದುಕನ್ನು ನಿರ್ಮಿಸುವ ಸಾಮಾಜಿಕ, ಮಾನಸಿಕ ಮತ್ತು ರಾಜಕೀಯ ಅಂಶಗಳನ್ನು ನಿರ್ವಹಿಸುವಲ್ಲಿ ಮಾರ್ಗದರ್ಶಕರಾಗಿ ಅವುಗಳನ್ನು ವಿವರಿಸುವ ಪಾತ್ರವಾಗಿದೆ.

ಇಶಾ ಬಢ್ಕಸ್, ಸಮಗ್ರ ಲೈಂಗಿಕತೆಯ ಶಿಕ್ಷಣ/ಸಾಧ್ಯತೆಗಳ ಕಾಮನಬಿಲ್ಲು